ಡಾ|| ಚೆನ್ನಕ್ಕ ಪಾವಟೆ

# ಬಂಕಾಪುರ ಕದಂಬರು: ವರುಣಶಿವ ಪಂಡಿತ

ಕದಂಬರರು ಕರ್ನಾಟಕದ ಪ್ರಾಚೀನತಮ ರಾಜ ಮನೆತನ. ಹಾನುಗಲ್ಲ ಕದಂಬರನ್ನು ಕುರಿತು ಮೊದಲು ಪ್ರಸ್ತಾಪ ಮಾಡಿದವರು ಫ್ಲೀಟ್ ಮತ್ತು ಮೊರೇಸ್[1] ಆ ಬಳಿಕ ಅನೇಕ ಕದಂಬ ಕುಟುಂಬಗಳನ್ನು ಶೋಧಿಸುತ್ತ, ಇವರು ಕಾಲಕಾಲಕ್ಕೆ ಬೇರೆ ಬೇರೆ ಪ್ರದೇಶಗಳಲ್ಲಿ ಗೋವೆಯ ಕದಂಬರು, ಹಾನಗಲ್ಲ ಕದಂಬರು, ಬೇಲೂರು ಕದಂಬರು,[2] ಉಚ್ಚಂಗಿ ಕದಂಬರು,[3] ನಾಗರಖಂಡದ ಕದಂಬರು,[4] ಕಳಿಂಗದ ಕದಂಬರು,[5] ಬಯಲುನಾಡಿನ ಕದಂಬರು,[6] ಕರಡೀ ಕಲ್ಲಿನ ಕದಂಬರು,[7] ಚಂದಾವರದ ಕದಂಬರು,[8] ನೂರುಂಬಾಡದ ಕದಂಬರು,[9] ಇತ್ಯಾದಿ ಹೆಸರಿನಿಂದ ಇತಿಹಾಸದಲ್ಲಿ ಕಾಣಿಸಿಕೊಂಡಿರುವರು. ಇವರಲ್ಲಿ 'ಬಂಕಾಪುರ ಕದಂಬರು' ಎಂಬ ಹೊಸ ಮನೆತನವನ್ನು ಡಾ|| ಬಿ.ಆರ್. ಗೋಪಾಲ ಅವರು ಶೋಧಿಸಿ ತಮ್ಮ 'ಮೈನರ್ ಡೈನೆಸ್ಟೀಸ್ ಆಫ್ ಸೌಥ ಇಂಡಿಯಾ' (ಪು-೩೭) ಕೃತಿಯಲ್ಲಿ ಅವರ ಬಗ್ಗೆ ಬರೆದಿದ್ದಾರೆ.[10] ನಾನೂ ಒಳಗೊಂಡಂತೆ ಅನೇಕರು ಈ ಅಭಿಪ್ರಾಯವನ್ನು ಪುನರುಚ್ಚರಿಸುತ್ತ ಬಂದಿದ್ದೇವೆ. ಆದರೆ ಇದು ಎಷ್ಟರಮಟ್ಟಿಗೆ ಸತ್ಯ ? ಎಂಬುದು ಇತ್ತೀಚಿನ ಪ್ರಶ್ನೆ ಡಾ|| ಬಿ. ಆರ್. ಗೋಪಾಲರು ಮಯೂರವರ್ಮ, ಹರಿಕೇಸರಿ, ತೋಯಿಮದೇವ ಇವರನ್ನು ಬಂಕಾಪುರದ ಕದಂಬರೆಂದು ಕರೆದಿರುವರೇ ಹೊರತು ಅದಕ್ಕೆ ಗಟ್ಟಿಯಾದ ಆಧಾರಗಳನ್ನು ಕೊಟ್ಟಿಲ್ಲ.

ನಮಗೆ ಗೊತ್ತಿರುವಂತೆ ಹಾನುಗಲ್ಲ ೫೦೦ರ ಪ್ರಾಂತವನ್ನು ಆಳುತ್ತಿದ್ದವರು ಹಾನಗಲ್ಲ ಕದಂಬರು. ಇವರ ಪ್ರದೇಶವ್ಯಾಪ್ತಿಗೆ ಬಂಕಾಪುರವು ಒಳಪಟ್ಟಿದ್ದಿತು. ಬಂಕಾಪುರದಿಂದ ಹಾನುಗಲ್ಲ ಸುಮಾರು ೩೫ ರಿಂದ ೪೦ ಕಿ.ಮೀ ಅಂತರದಲ್ಲಿದೆ ಎಂಬುದನ್ನು ಇಲ್ಲಿ ಗಮನಿಸಬೇಕು. ಬಂಕಾಪುರವು ಕದಂಬರ ರಾಜಧಾನಿ

---

* ಉಪನ್ಯಾಸಕರು, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ-೫೮೦ ೦೦೩.

1 ಕದಂಬಕುಲ, ಮೊರೇಸ್ ೧೯೩೫.

2 ಜರ್ನಲ್ ಆಫ್ ದಿ ಬಾಂಬೆ ಬ್ರ್ಯಾಂಚ್ ರಾಯಲ್ ಏಸಿಯಾಟಿಕ್ ಸೊಸೈಟಿ. ಸಂ-೯.

3 ಅಜವರ್ಮನು ಈ ಶಾಖೆಯ ಮೊದಲ ದೊರೆ.

4 ಬಮ್ಮರಸ ಕದಂಬನು ಈ ಶಾಖೆಯ ಮೊದಲ ದೊರೆ.

5 ಪಂಚವಿಷಯಾಧಿಪತಿ ಮಹಾಮಂಡಲೇಶ್ವರ ರಾಣಕ ಶ್ರೀ ಭಾಮಖೇಡಿ ಈ ಶಾಖೆಯ ಮೊದಲನೆಯ ದೊರೆ.

6 ಬಯಲುನಾಡು ೫೩೦೦ರ ಆಡಳಿತ ಕ್ಷೇತ್ರ : ಪುನ್ನಾಟ ಅಥವಾ ಹದಿನಾಡು, ಇದರ ರಾಜಧಾನಿ ಕೀರ್ತಿಪುರ.

7 ಮೈನರ್ ಡೈನೇಸ್ಟೀಸ್—ಕರ್ನಾಟಕ ಪು— ೦

8 —ಅದೇ— ಪು—೭೪

9 —ಅದೇ— ಪು—೬೬

10 —ಅದೇ— ಪು—೩೭

ಯಾಗಿದ್ದಿತು ಎಂದು ವಿದ್ವಾಂಸರು ಭಾವಿಸಲು ಇರುವ ಒಂದೇ ಒಂದು ಆಧಾರವೆಂದರೆ ಶಾಸನಗಳಲ್ಲಿ ಬರುವ 'ಹಾನುಂಗಲ್ಲಯಿನೂಱಱ ಸುಂಕದಧಿಕಾರಿ ಲಕ್ಷ್ಮೀಗಧೀಶ್ವರನಾಗಿ ಶ್ರೀ ರಾಜಧಾನಿ ಪಟ್ಟಣಂ ಬಂಕಾಪುರ,[11] "ಹಾನುಂಗಲ್ಲ ನಾಡೊಳಗಣ ಶ್ರೀ ಮದಿಂದ್ರವಲ್ಲಭ ರಾಜಧಾನಿ ಪಟ್ಟಣಂ ಬಂಕಾಪುರ.[12] ಎಂದು ತೋರುತ್ತದೆ. ಇದರ ಅರ್ಥ ರಾಷ್ಟ್ರಕೂಟ ಇಂದ್ರನಿಗೆ ಒಂದು ಕಾಲಕ್ಕೆ ಇದು ರಾಜಧಾನಿಯಾಗಿದ್ದಿತೆಂದು ಹೇಳಬಹುದೇ ಹೊರತು ಕದಂಬರಿಗೆ ರಾಜಧಾನಿಯಾಗಿತ್ತೆಂದು ಹೇಳುವ ಹಾಗಿಲ್ಲ. ರಾಷ್ಟ್ರಕೂಟ ಇಂದ್ರನಿಗೂ ಬಂಕಾಪುರಕ್ಕೂ ರಾಜಕೀಯ ಸಂಬಂಧವಿದ್ದುದನ್ನು ಮೇಲಿನ ವಾಕ್ಯ ತಿಳಿಸುವುದಲ್ಲದೇ ಅಲ್ಲಿರುವ ಇಂದ್ರೇಶ್ವರ ದೇವಸ್ಥಾನವೂ ಆತನ ಧಾರ್ಮಿಕ ಸಂಬಂಧವನ್ನು ಸ್ಪಷ್ಟಪಡಿಸುತ್ತದೆ. ಹೀಗೆ ಬಂಕಾಪುರವು ಹತ್ತನೆಯ ಶತಮಾನದಲ್ಲಿ ರಾಷ್ಟ್ರಕೂಟ ಇಂದ್ರನ ರಾಜಧಾನಿಯಾಗಿತ್ತು ಎಂದು ಹೇಳಬಹುದೇ ಹೊರತು ಕದಂಬರ ರಾಜಧಾನಿಯಾಗಿದ್ದಿತೆಂದು ಹೇಳಲು ನಮಗೆ ನೇರವಾದ ಆಧಾರಗಳಿಲ್ಲ.

ಒಂದು ವೇಳೆ ಇದು ಪುಲಿಗೆಱೆ ಮುನ್ನೂರು, ಬೆಳುವಲ ಮುನ್ನೂರುಗಳಿಗೆ ಒಂದು ಶಾಶ್ವತ ಪ್ರಾಂತವಾಗಿದ್ದರೆ ಬಂಕಾಪುರದ ಮುಂದೆ ಅಂಕಿಯ ಸೂಚನೆಯಾಗಲಿ, ಕಂಪಣ ಮಂಡಲವೆಂಬ ವಿಶೇಷಣವಾಗಲಿ ಕಾಣಿಸಿಕೊಳ್ಳಬೇಕಿತ್ತು. ಅಂಥ ಯಾವ ಉದಾಹರಣೆಗಳೂ ನಮಗೆ ಸಿಕ್ಕಿಲ್ಲ. ಹೀಗಿದ್ದಾಗ ಬಂಕಾಪುರ ಪ್ರದೇಶವನ್ನು ಒಂದು ರಾಜ್ಯವೆಂದೂ, ಆದರ ರಾಜಧಾನಿ ಬಂಕಾಪುರವೆಂದೂ, ಆದನ್ನು ಆಳುತ್ತಲಿದ್ದವರು ಕದಂಬರೆಂದು ಹೇಳುವುದು ದುಸ್ತರವಾಗುತ್ತದೆ.

ಒಂದು ಮಾತು ನಿಜ ; ರಾಷ್ಟ್ರಕೂಟ ಇಂದ್ರನ ಹೆಸರಿನಲ್ಲಿ ಸ್ಥಾಪಿತವಾದವು ಬಂಕಾಪುರದ ಇಂದ್ರೇಶ್ವರಗೇರಿ.[13] ಇಂದ್ರೇಶ್ವರಪುರ[14] ಹಾಗೂ ಇಂದ್ರೇಶ್ವರ ದೇವಸ್ಥಾನ.[15] ಚಾಲುಕ್ಯ ತ್ರೈಲೋಕ್ಯಮಲ್ಲ (ಒಂದನೇ ಸೋಮೇಶ್ವರ), ಭುವನೈಕಮಲ್ಲ (ಇಮ್ಮಡಿ ಸೋಮೇಶ್ವರ) ಹಾಗೂ ತ್ರಿಭುವನಮಲ್ಲ (ಆರನೇ ವಿಕ್ರಮಾದಿತ್ಯ) ಈ ಮೂವರು ದೊರೆಗಳ ಕಾಲದಲ್ಲಿಯೂ ಇಂದ್ರೇಶ್ವರ ದೇವಸ್ಥಾನದ ಖ್ಯಾತಿ ಹಬ್ಬಿತ್ತು. ಭುವನೈಕಮಲ್ಲನ ರಾಜಗುರುವೆನಿಸಿದ ರಾಜಗುರುದೇವ ವರುಣಶಿವಪಂಡಿತ 'ಶ್ರೀಮದ್ಬಂಕಾಪುರದಿಂದ್ರೇಶ್ವರ ದೇವರ್ಗಾಳ್ವಪನ್ನೆರಡು ಬಾಡಂ' ಆಳುತ್ತಲಿದ್ದ. ಕ್ರಿ.ಶ. ೧೦೪೫ರ ಕೋಳೂರು ಶಾಸನ ಇವರನ್ನು 'ಸ್ವಸ್ತಿ ಯಮನಿಯಮ ಸ್ವಾಧ್ಯಾಯಧ್ಯಾನಧಾರಣ ಪ್ರಾಣಾಯಾಮ ಪ್ರತ್ಯಾಹಾರ ಜಪಸಮಾಧಿ ಸಂಪನ್ನರ್ ಈಶ್ವರ ಪಾದ ಕಮಲಭೃಂಗ, ಸಾಹಸೋತ್ತುಂಗಾಶ್ರಿತ ಜನ ಕಲ್ಪವೃಕ್ಷ ಶರಣಾಗತಸುರಕ್ಷ, ನುಡಿದಂತೆ ಮಾರ್ಪ ಕುರೆಕೂರ್ಪಂ ಪ್ರತಿಪನ್ನಮೇರುವೇಕಾಂಗವೀರ ಅಸಂದು ಧೀರಂ ವೀರಾವತಾರಂ, ವೀರಚೂಡಾಮಣಿ, ಗೋತ್ರ ಚಿನ್ತಾಮಣಿ ರೊಡ್ಡಕೈವಾರಂ ಶೈವಪ್ರಾಕಾರಂ ಶರಪರಿ ಪರಿಣತ ನಿಸ್ಸಂಕವೈರಿವೃಂದಕ ಶರಸಂಧಾನ ಬಾಣಶಿಕ್ಷಾ ಗುರು ಕಲಿಯುಗ ದ್ರೋಣಾಚಾರ್ಯ ಸರ್ವಸಸ್ತ್ರಸಾಸ್ತ್ರ ವಿಶಾರದಂ ನಾರಾಚ ಪರಶುರಾಮ ಗಿರಿದುರ್ಗಭಂಜ ನಾಂಜನೇಯ ತ್ರೈಲೋಕ್ಯರಂಜನಂ ಕಟಕಮಾಭೀಶಂ ಕೊಂಕಣರಕ್ಷಾಲಂ ಕದಂಬಾನ್ವಯ ಸಮುದ್ಧರಣ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮತ್ ರಾಜಗುರುದೇವರ್ ಬಂಕಾಪುರ ದಿಂದ್ರೇಶ್ವರದೇವರ್ಗಾಳ್ವ ಪನ್ನೆರಡುಂ ಬಾಡಮುಂ ಸುಕದಿನಾಳುತ್ತಮಿರೆ[16] ಎಂದು ವಿವರಿಸಿದೆ.

ಮೇಲಿನ ಶಾಸನದಲ್ಲಿಯ 'ಕೊಂಕಣರಕ್ಷಾಲಂ ಕದಂಬಾನ್ವಯ ಸಮುದ್ಧರಣ' ಎಂಬ ವಾಕ್ಯ ಚಿಂತನ ಯೋಗ್ಯವಾಗಿದೆ. ಈತ ಹಾನುಗಲ್ಲ ಕದಂಬರನ್ನು ಉದ್ಧರಿಸಿದನೋ, ಗೋವೆಯ ಕದಂಬರನ್ನುದ್ಧರಿಸಿದನೋ

11 ಎಸ್.ಆಯ್.ಆಯ್. ೧೮, ೨೯೧ ಬಂಕಾಪುರ (ತಾ) ಶಿಗ್ಗಾಂವ

12 ಬಂಕಾಪುರ ಶೋಧನ : ಚೆನ್ನಕ್ಕ ಎಲಿಗಾರ : ೧ನೆಯ ಶಾಸನ. ಪು–೨೦

13 ಎ.ಇ. ೧೬, ೧೧ ಹೊಟ್ಟೂರು.

14 ಎಸ್.ಆಯ್.ಆಯ್. ೧೮, ೬೬ ಬಂಕಾಪುರ

15 ಎ.ಇ. ೧೯—೨೯ (೬) ಕೋಳೂರು (ಕ್ರಿ.ಶ. ೧೦೪೫)

16 ಎ.ಇ. ೧೯. ಪು–೧೮೦–೧೮೩, ಕೋಳೂರು, (ಕ್ರಿ.ಶ. ೧೦೪೫)

ಎಂಬುದು ಸ್ಪಷ್ಟವಿಲ್ಲ. ಹೀಗೆ ಉದ್ಧಾರ ಮಾಡಿದ ಸಂದರ್ಭ ಸನ್ನಿವೇಶಗಳೂ ತಿಳಿದುಬರುವುದಿಲ್ಲ. ಬಂಕಾಪುರವನ್ನೊಳಗೊಂಡ ಹಾನುಂಗಲ್ಲ ಪ್ರಾಂತವನ್ನಾಳುತ್ತಿದ್ದ ಹಾನುಗಲ್ಲ ಕದಂಬರನ್ನೇ ಉದ್ಧರಿಸಿರಬಹುದು. ಈ ಬಗ್ಗೆ ಶೋಧಿಸುವುದು ಅವಶ್ಯವಿದೆ.

ಒಟ್ಟಿನಲ್ಲಿ ಬಂಕಾಪುರವು ಯಾವುದೋ ಕದಂಬ ರಾಜಧಾನಿಯಾಗಿರಲಿಲ್ಲ. ವರುಣಶಿವ ಪಂಡಿತ ಒಂದು ಕದಂಬ ಮನೆತನವನ್ನು ಬಹುಶಃ ಹಾನುಗಲ್ಲ ಕದಂಬರ ಮನೆತನವನ್ನು ಉದ್ಧರಿಸಿದ್ದಾನೆ.